

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ. ಕೆ. ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 149 |
| ಉತ್ತರಿಸಬೇಕಾದ ದಿನಾಂಕ | : | 16.02.2022 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ ಸಚಿವರು. |

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ರಾಜ್ಯದಲ್ಲಿ ಕೇಂದ್ರ ಸರ್ಕಾರದ ಕಿಷನ್ ಸಾಲ ಯೋಜನೆ ಅಡಿ ಹೈನುಗಾರಿಕೆಗಾಗಿ ನೀಡುವ ಗರಿಷ್ಠ ಮಟ್ಟದ ಸಾಲ, ಬಡ್ಡಿ ಮನ್ನಾ ಮತ್ತು ಸಹಾಯ ಧನ ಒಳಗೊಂಡಂತೆ ಆರ್ಥಿಕ ನೆರವುಗಳು ಯಾವುವು; (ಈ ಯೋಜನೆಯ ಪೂರ್ಣ ವಿವರ ನೀಡುವುದು)</td><td>ಹೈನುಗಾರಿಕೆ:<br>• ಮಿಶ್ರತಳಿ ದನಗಳ ನಿರ್ವಹಣೆ (1+1)<br>• ಎಮ್ಮೆಗಳ ನಿರ್ವಹಣೆ (1+1)<br><br>
<table>
<tr><th>ಕ್ರ ಸಂ</th><th>ಘಟಕ</th><th>ಘಟಕದ ವಿವರ</th><th>ಸೌಲಭ್ಯಗಳ ವಿವರ</th></tr>
<tr><td>1</td><td>ಹೈನುಗಾರಿಕೆ</td><td>ಮಿಶ್ರತಳಿ ದನಗಳ ನಿರ್ವಹಣೆ (1+1)</td><td>ಪ್ರತಿ ಹಸುವಿಗೆ ಗರಿಷ್ಠ ರೂ. 14,000/- ರಂತೆ ಒಟ್ಟು ಎರಡು ಹಸುಗಳಿಗೆ ರೂ. 28,000/- ಸಾಲ ಸೌಲಭ್ಯ.</td></tr>
<tr><td></td><td></td><td>ಮಿಶ್ರತಳಿ ದನಗಳ ನಿರ್ವಹಣೆ (1+1)</td><td>ಪ್ರತಿ ಎಮ್ಮೆಗೆ ಗರಿಷ್ಠ ರೂ. 16,000/- ರಂತೆ ಒಟ್ಟು ಎರಡು ಎಮ್ಮೆಗಳಿಗೆ ರೂ. 32,000/- ಸಾಲ ಸೌಲಭ್ಯ.</td></tr>
</table>
<br>ಯೋಜನೆಯ ಪೂರ್ಣ ವಿವರ: ಕೇಂದ್ರ ಸರ್ಕಾರದ ಕಿಸಾನ್ ಕ್ರೆಡಿಟ್ (KCC) ಯೋಜನೆಯನ್ವಯ ಪಶುಸಂಗೋಪನಾ ಚಟುವಟಿಕೆಯಲ್ಲಿ ತೊಡಗಿಸಿಕೊಂಡವರಿಗೆ ನಿರ್ವಹಣಾ ವೆಚ್ಚ ಭರಿಸಲು ಹೈನುಗಾರಿಕೆ, ಕುರಿ-ಮೇಕೆ, ಹಂದಿ ಹಾಗೂ ಕೋಳಿ ಸಾಕಾಣಿಕೆ ಕಸುಬುಗಳನ್ನು ಕೈಗೊಳ್ಳಲು ಅವಶ್ಯಕತೆಯಿರುವ ದುಡಿಮೆ ಬಂಡವಾಳವನ್ನು ಅರ್ಹ ರೈತರಿಗೆ ಆರ್ಥಿಕ ನೆರವು ಒದಗಿಸಲು ಅವಕಾಶವಿರುತ್ತದೆ. ಈ ಕಿಸಾನ್ ಕ್ರೆಡಿಟ್ ಕಾರ್ಡ್ ಯೋಜನೆಯಡಿ ಬಡ್ಡಿ ರಿಯಾಯಿತಿ ಸೌಲಭ್ಯವು ರೂ.3.00 ಲಕ್ಷಗಳವರೆಗೆ ದೊರೆಯಬಹುದಾಗಿದ್ದು, ಪ್ರತಿ ರೈತರಿಗೆ ರೂ. 1.60 ಲಕ್ಷ ಸಾಲ ಸೌಲಭ್ಯವನ್ನು ಯಾವುದೇ ಭದ್ರತೆಯಿಲ್ಲದೆ ಪಡೆಯುವ ಅವಕಾಶವಿರುತ್ತದೆ. ಕಿಸಾನ್ ಕ್ರೆಡಿಟ್ ಕಾರ್ಡ್ ನಿಂದ ಪಡೆಯುವ ಸಾಲಕ್ಕೆ ಶೇ. 2 ರಷ್ಟು ಬಡ್ಡಿ ಸಹಾಯಧನ ನೀಡುತ್ತಿದ್ದು, ಈ ಸಾಲವನ್ನು ಸಕಾಲದಲ್ಲಿ ಮರುಪಾವತಿ ಮಾಡಿದಲ್ಲಿ ಹೆಚ್ಚುವರಿಯಾಗಿ ವಾರ್ಷಿಕ ಶೇ. 3 ರಷ್ಟು ಬಡ್ಡಿ ಸಹಾಯಧನದ ಸೌಲಭ್ಯವನ್ನು ಸಹಾ ಪಡೆಯಬಹುದಾಗಿದೆ. (ಅನುಬಂಧ -1 ಲಗತ್ತಿಸಲಾಗಿದೆ).<br><br>ಭಾರತ ಸರ್ಕಾರವು 2020-21 ನೇ ಸಾಲಿನ ಜೂನ್ ಮಾಹೆಯಿಂದ ಹೈನುಗಾರಿಕೆ ಬಲವರ್ಧನೆಗಾಗಿ ಭಾರತ ಸರ್ಕಾರದ ಡಿ.ಎಫ್.ಎಸ್. (Dept. of Financial Services) ಮತ್ತು ಡಿ.ಎ.ಹೆಚ್.ಡಿ.</td></tr>
</table>

| | | |
|---|---|---|
| | | (Dept. of Animal Husbandry and Dairying) ಇಲಾಖೆಯ ಆರ್ಥಿಕ ನೆರವಿನಿಂದ ಕಿಸಾನ್ ಕ್ರೆಡಿಟ್ ಕಾರ್ಡ್ ಸೌಲಭ್ಯ ಹೊಂದಿರುವ ಹೈನುಗಾರರಿಗೆ ಭದ್ರತೆ ಇಲ್ಲದೆ, ರೂ.1.60 ಲಕ್ಷದ ವರೆಗೆ ಸಾಲ ಪಡೆಯಲು ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಕೇಂದ್ರ ಸರ್ಕಾರವು ಸಾಲದ ಮೇಲಿನ ಬಡ್ಡಿ ದರದಲ್ಲಿ ಶೇ.2 ರಷ್ಟು ರಿಯಾಯಿತಿಯನ್ನು ನೀಡುತ್ತದೆ. ಸಾಲದ ಮೊತ್ತವನ್ನು ಸಕಾಲದಲ್ಲಿ ಮರು ಪಾವತಿ ಮಾಡಿದಲ್ಲಿ, ಬಡ್ಡಿ ದರದಲ್ಲಿ ಹೆಚ್ಚುವರಿಯಾಗಿ ಶೇ.3 ರಷ್ಟು ರಿಯಾಯಿತಿಗೆ ಅವಕಾಶವನ್ನು ನೀಡಲಾಗಿದೆ. |
| ಆ | ಈ ಯೋಜನೆಯಡಿ ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಹೈನುಗಾರರಿಗೆ ಕೇಂದ್ರ ಸರ್ಕಾರದಿಂದ ದೊರೆತಿರುವ ಆರ್ಥಿಕ ನೆರವು ಎಷ್ಟು; (ಜಿಲ್ಲಾವಾರು ಪೂರ್ಣ ಮಾಹಿತಿ ನೀಡುವುದು) | ಈ ಯೋಜನೆಯನ್ನು 2020-21ನೇ ಸಾಲಿನಲ್ಲಿ ಪ್ರಾರಂಭಿಸಿದ್ದು, ಡಿಸೆಂಬರ್-31 ನೇ 2021ರ ಅಂತ್ಯಕ್ಕೆ 1.77 ಲಕ್ಷ ರೈತರಿಗೆ ರೂ.292.08 ಕೋಟಿ ದುಡಿಯುವ ಬಂಡವಾಳ ಸಾಲವನ್ನು ಸಂಬಂಧಪಟ್ಟ ಬ್ಯಾಂಕ್ ಶಾಖೆಗಳು ಮಂಜೂರು ಮಾಡಿರುತ್ತವೆ.<br><br>ಎರಡನೇ ಹಂತದ ಆಂದೋಲನವನ್ನು ನವೆಂಬರ್-15 2021 ರಿಂದ ಹೊಸದಾಗಿ ಪ್ರಾರಂಭಿಸಿದ್ದು, ತಹಲ್‌ವರೆಗೆ 24,513 ಕೆ.ಸಿ.ಸಿ. ಅರ್ಜಿಗಳನ್ನು ಬ್ಯಾಂಕ್ ಶಾಖೆಗಳಿಗೆ ಸಲ್ಲಿಸಲಾಗಿದೆ.<br><br>ಹೈನುಗಾರರಿಗೆ ದೊರೆತಿರುವ ಆರ್ಥಿಕ ನೆರವಿನ ಒಕ್ಕೂಟವಾರು ಮಾಹಿತಿಯನ್ನು **ಅನುಬಂಧ-2** ರಲ್ಲಿ ತಿಳಿಸಲಾಗಿದೆ. |
| ಇ | ಇದೇ ರೀತಿ ಕೇಂದ್ರ ಸರ್ಕಾರ ರಾಷ್ಟ್ರೀಯ ಗೋಕುಲ ಅಭಿಯಾನ ಅಡಿಯಲ್ಲಿ ರಾಜ್ಯದಲ್ಲಿ ಸ್ಥಾಪಿಸಲಾಗಿರುವ ವೀರ್ಯ ಕೇಂದ್ರಗಳೆಷ್ಟು; ಈ ವೀರ್ಯ ಕೇಂದ್ರಗಳು ಬೃಹತ್ ಸಂಖ್ಯೆಯಲ್ಲಿ ಹೈನುಗಾರಿಕೆ ಕೈಗೊಂಡಿರುವ ರಾಜ್ಯದ ರೈತರಿಗೆ ಸಾಕಾಗುವುದೇ; ಇಲ್ಲದಿದ್ದಲ್ಲಿ, ಕೇಂದ್ರ ಸರ್ಕಾರದ ಈ ಯೋಜನೆ ಅಡಿಯಲ್ಲಿ ಹೆಚ್ಚುವರಿ ವೀರ್ಯ ಕೇಂದ್ರಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗಿದೆಯೇ? (ಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಒಟ್ಟು 04 ವೀರ್ಯ ಸಂಸ್ಕರಣಾ ಕೇಂದ್ರಗಳು ಹಾಗೂ 06 ವೀರ್ಯನಳಿಕೆ ವಿತರಣಾ ಕೇಂದ್ರಗಳು ಇರುತ್ತವೆ. ವೀರ್ಯ ಸಂಸ್ಕರಣಾ ಕೇಂದ್ರಗಳು ಇಲಾಖೆಯ ಅನುದಾನದಲ್ಲಿ ಸ್ಥಾಪಿಸಲ್ಪಟ್ಟಿರುತ್ತದೆ. ರಾಷ್ಟ್ರೀಯ ಗೋಕುಲ ಅಭಿಯಾನ ಅಡಿಯಲ್ಲಿ ಬಿಡುಗಡೆಯಾದ ಅನುದಾನದಲ್ಲಿ ಇವುಗಳ ಬಲವರ್ಧನೆ ಕೈಗೊಳ್ಳಲಾಗಿದೆ. 2015-16 ನೇ ಸಾಲಿನಲ್ಲಿ ರಾಷ್ಟ್ರೀಯ ಗೋಕುಲ ಅಭಿಯಾನ ಅಡಿಯಲ್ಲಿ ರೂ.77.86 ಲಕ್ಷ ಬಲವರ್ಧನೆಗಾಗಿ ಬಿಡುಗಡೆಯಾಗಿದ್ದು, ಇದು ಪೂರ್ಣ ವಿನಿಯೋಗಿಸಲಾಗಿದೆ. 2021-22 ನೇ ಸಾಲಿಗೆ 04 ವೀರ್ಯ ಸಂಸ್ಕರಣಾ ಕೇಂದ್ರಗಳ ಬಲವರ್ಧನೆಗೆ ರೂ.26.44 ಕೋಟಿ ಅನುದಾನದ ಪ್ರಸ್ತಾವನೆಯವನ್ನು ಕೇಂದ್ರ ಸರ್ಕಾರಕ್ಕೆ ರಾಷ್ಟ್ರೀಯ ಗೋಕುಲ ಅಭಿಯಾನ ಅಡಿಯಲ್ಲಿ ಸಲ್ಲಿಸಲಾಗಿದ್ದು, ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ.<br><br>04 ವೀರ್ಯ ಸಂಸ್ಕರಣಾ ಕೇಂದ್ರಗಳಿಂದ 2020-21 ನೇ ಸಾಲಿನಲ್ಲಿ 36 ಲಕ್ಷ ವಿವಿಧ ತಳಿಯ ವೀರ್ಯನಳಿಕೆಗಳನ್ನು ಉತ್ಪಾದಿಸಲಾಗಿದೆ. 2021-22 ನೇ ಸಾಲಿನಲ್ಲಿ ಜನವರಿ 2022ರ ಅಂತ್ಯದವರೆಗೆ 29.5 ಲಕ್ಷ ವಿವಿಧ ತಳಿಯ ವೀರ್ಯನಳಿಕೆಗಳನ್ನು ಉತ್ಪಾದಿಸಲಾಗಿದೆ. ಇಲಾಖೆಯಿಂದ ಕೈಗೊಳ್ಳಲಾಗುವ ಕೃತಕ ಗರ್ಭಧಾರಣಾ ಕಾರ್ಯಕ್ರಮಕ್ಕೆ ಸದರಿ ವೀರ್ಯನಳಿಕೆಗಳು ಸಾಕಾಗುತ್ತದೆ. |

**ಪಸಂಮೀ ಇ-26 ಸಲೆವಿ 2022**

**ಪ್ರಭು ಬಿ. ಚವ್ಹಾಣ್**
**ಪಶುಸಂಗೋಪನೆ ಸಚಿವರು,**

# ಅನುಬಂಧ -1

| ಕ್ರ.ಸಂ | ಘಟಕ | ಘಟಕದ ವಿವರ | ಸಾಲ ಸೌಲಭ್ಯಗಳ ವಿವರ |
|---|---|---|---|
| 1 | ಹೈನುಗಾರಿಕೆ | ಮಿಶ್ರತಳಿ ದನಗಳ ನಿರ್ವಹಣೆ (1+1) | ಪ್ರತಿ ಹಸುವಿಗೆ ಗರಿಷ್ಠ ರೂ. 14,000/- ರಂತೆ ಒಟ್ಟು ಎರಡು ಹಸುಗಳಿಗೆ ರೂ. 28,000/- ಸಾಲ ಸೌಲಭ್ಯ. |
| | | ಸುಧಾರಿತ ಎಮ್ಮೆಗಳ ನಿರ್ವಹಣೆ (1+1) | ಪ್ರತಿ ಎಮ್ಮೆಗೆ ಗರಿಷ್ಠ ರೂ. 16,000/- ರಂತೆ ಒಟ್ಟು ಎರಡು ಎಮ್ಮೆಗಳಿಗೆ ರೂ. 32,000/- ಸಾಲ ಸೌಲಭ್ಯ |
| 2 | ಕುರಿ ಸಾಕಾಣಿಕೆ | ಕುರಿಗಳ ನಿರ್ವಹಣೆ (10+1 )<br>(8 ತಿಂಗಳ ಸಾಕಣಿಕೆ ಅವದಿಗೆ) | ಕಟ್ಟಿ ಮೇಯಿಸುವ ಕುರಿಗಳಿಗೆ ರೂ. 24,000/- ರಂತೆ ಹಾಗೂ ಬಯಲಿನಲ್ಲಿ ಮೇಯಿಸುವ ಕುರಿಗಳಿಗೆ ರೂ 12,000/- ಸಾಲ ಸೌಲಭ್ಯ |
| | | ಕುರಿಗಳ ನಿರ್ವಹಣೆ (20+1)<br>(8 ತಿಂಗಳ ಸಾಕಣಿಕೆ ಅವದಿಗೆ) | ಕಟ್ಟಿ ಮೇಯಿಸುವ ಕುರಿಗಳಿಗೆ ರೂ. 48,000/- ರಂತೆ ಹಾಗೂ ಬಯಲಿನಲ್ಲಿ ಮೇಯಿಸುವ ಕುರಿಗಳಿಗೆ ರೂ 24,000/- ಸಾಲ ಸೌಲಭ್ಯ |
| | | ಕುರಿಮರಿಗಳ ಕೊಬ್ಬಿಸುವುದು (10) | ರೂ. 13,000 ರಂತೆ ಸಾಲ ಸೌಲಭ್ಯ |
| | | ಕುರಿಮರಿಗಳ ಕೊಬ್ಬಿಸುವುದು 20) | ರೂ. 26,000 ರಂತೆ ಸಾಲ ಸೌಲಭ್ಯ |
| 3 | ಮೇಕೆ ಸಾಕಾಣಿಕೆ | ಮೇಕೆಗಳ ನಿರ್ವಹಣೆ (10+1)<br>(8 ತಿಂಗಳ ಸಾಕಣಿಕೆ ಅವದಿಗೆ) | ಕಟ್ಟಿ ಮೇಯಿಸುವ ಮೇಕೆಗಳಿಗೆ ರೂ. 24,000/- ರಂತೆ ಹಾಗೂ ಬಯಲಿನಲ್ಲಿ ಮೇಯಿಸುವ ಮೇಕೆಗಳಿಗೆ ರೂ 13,000/- ಸಾಲ ಸೌಲಭ್ಯ |
| | | ಮೇಕೆಗಳ ನಿರ್ವಹಣೆ (20+1)<br>(8 ತಿಂಗಳ ಸಾಕಣಿಕೆ ಅವದಿಗೆ ) | ಕಟ್ಟಿ ಮೇಯಿಸುವ ಮೇಕೆಗಳಿಗೆ ರೂ. 48,000/- ರಂತೆ ಹಾಗೂ ಬಯಲಿನಲ್ಲಿ ಮೇಯಿಸುವ ಮೇಕೆಗಳಿಗೆ ರೂ 26,000/- ಸಾಲ ಸೌಲಭ್ಯ |
| 4 | ಹಂದಿ ನಿರ್ವಹಣೆ | 10 ಕೊಬ್ಬಿಸುವ ಹಂದಿಗಳ ಸಾಕಾಣಿಕೆ | ರೂ. 60000 ರಂತೆ ಸಾಲ ಸೌಲಭ್ಯ |
| 5 | ಕೋಳಿ ಸಾಕಾಣಿಕೆ | ಅ. ಮಾಂಸದ ಕೋಳಿ ಸಾಕಾಣಿಕೆ (ಒಂದು ಕೋಳಿಗೆ ರೂ. 80ರ ರಂತೆ) | 1000 ಕೋಳಿಗಳಿಗೆ ಗರಿಷ್ಠ ರೂ. 80,000/-ರ ವರೆಗೆ ಸಾಲ ಸೌಲಭ್ಯ |
| | | ಆ. ಮೊಟ್ಟೆ ಕೋಳಿ ಸಾಕಾಣಿಕೆ (ಒಂದು ಕೋಳಿಗೆ ರೂ.180.00 ರಂತೆ) | 1000 ಕೋಳಿಗಳಿಗೆ ಗರಿಷ್ಠ ರೂ. 1,80,000/-ರ ವರೆಗೆ ಸಾಲ ಸೌಲಭ್ಯ |
| 6 | ಮೊಲ ಸಾಕಾಣಿಕೆ | ಮೊಲ ಸಾಕಾಣಿಕೆ (50+10) | ಮೊಲ ಸಾಕಾಣಿಕಗೆ ಗರಿಷ್ಠ ರೂ. 50,000/-ವರೆಗೆ ಸಾಲ ಸೌಲಭ್ಯ |

## ಅನುಬಂಧ-2

### ಕರ್ನಾಟಕ ಹಾಲು ಉತ್ಪಾದಕರ ಮಹಾಮಂಡಳ ನಿ., ಬೆಂಗಳೂರು -560 029.

| ಕ್ರ. ಸಂ. | ಹಾಲು ಒಕ್ಕೂಟಗಳು | ಜಿಲ್ಲೆಗಳು | ಕೆ.ಸಿ.ಸಿ.ಯೋಜನೆಯಡಿ, ಮಂಜೂರಾಗಿ ಬ್ಯಾಂಕ್ ಗಳ ಮೂಲಕ ದುಡಿಯುವ ಬಂಡವಾಳ ಪಡೆದ ರೈತರು (ಸಂಖ್ಯೆಗಳಲ್ಲಿ) | ಒಟ್ಟು ಬಿಡುಗಡೆಯಾಗಿರುವ ದುಡಿಯುವ ಬಂಡವಾಳದ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|---|---|
| 1 | ಬೆಂಗಳೂರು | ಬೆಂಗಳೂರು ನಗರ | 4,536 | 648.37 |
| | | ಬೆಂಗಳೂರು ಗ್ರಾಮಾಂತರ | 8,674 | 1,207.86 |
| | | ರಾಮನಗರ | 9,876 | 940.61 |
| 2 | ಕೋಲಾರ | ಕೋಲಾರ | 8,762 | 1,371.37 |
| | | ಚಿಕ್ಕಬಳ್ಳಾಪುರ | 10,365 | 1,217.46 |
| 3 | ಮೈಸೂರು | ಮೈಸೂರು | 11,622 | 2,320.10 |
| 4 | ಚಾಮರಾಜನಗರ | ಚಾಮರಾಜನಗರ | 2,862 | 554.50 |
| 5 | ಮಂಡ್ಯ | ಮಂಡ್ಯ | 15,623 | 2,956.00 |
| 6 | ತುಮಕೂರು | ತುಮಕೂರು | 6,863 | 355.31 |
| 7 | ಹಾಸನ | ಹಾಸನ | 35,748 | 3,195.70 |
| | | ಕೊಡಗು | 539 | 69.90 |
| | | ಚಿಕ್ಕಮಗಳೂರು | 2,818 | 247.90 |
| 8 | ಧಾರವಾಡ | ಧಾರವಾಡ | 2,135 | 761.28 |
| | | ಗದಗ | 4,521 | 1,327.47 |
| | | ಹಾವೇರಿ | 2,294 | 583.04 |
| | | ಉತ್ತರಕನ್ನಡ | 4 | 4.00 |
| 9 | ಬೆಳಗಾವಿ | ಬೆಳಗಾವಿ | 4,050 | 1,300.89 |
| 10 | ವಿಜಯಪುರ | ವಿಜಯಪುರ | 986 | 253.63 |
| | | ಬಾಗಲಕೋಟೆ | 2,167 | 693.42 |
| 11 | ಕಲಬುರಗಿ | ಕಲಬುರಗಿ | 190 | 57.98 |
| | | ಬೀದರ್ | 270 | 60.00 |
| | | ಯಾದಗೀರ್ | 0 | 0.00 |
| 12 | ದಕ್ಷಿಣ ಕನ್ನಡ | ದಕ್ಷಿಣ ಕನ್ನಡ | 7,252 | 1405.69 |
| | | ಉಡುಪಿ | 7299 | 1810.70 |
| 13 | ಶಿವಮೊಗ್ಗ | ಶಿವಮೊಗ್ಗ | 3,580 | 599.36 |
| | | ದಾವಣಗೆರೆ | 3,932 | 857.75 |
| | | ಚಿತ್ರದುರ್ಗ | 3,868 | 839.18 |
| 14 | ಬಳ್ಳಾರಿ | ರಾಯಚೂರು | 1,000 | 112.00 |
| | | ಬಳ್ಳಾರಿ | 6,582 | 1,595.00 |
| | | ಕೊಪ್ಪಳ | 8,962 | 1,862.00 |
| | | ಒಟ್ಟು | 1,77,380 | 29,208.47 |